ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೮ ೨೩
ಸಂಚಿಕೆ : ೨೩ ೦೨

(ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜುಲೈ-ಸೆಪ್ಟೆಂಬರ್ ೨೦೧೨

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



## ಪರಿವಿಡಿ



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೫೬೦ ೦೧೯

ದೂರವಾಣಿ: ೨೬೬೧೫೮೭೭
೨೬೬೭೬೭೭೩

ಇಮೇಲ್ : bmsritrust@gmail.com

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥, ಮಂಡ್ಯ ಜಿಲ್ಲೆ.

## ಶ್ರದ್ಧಾಂಜಲಿ



ಪ್ರೊ॥ ಡಿ. ಲಿಂಗಯ್ಯ
ಶ್ರದ್ಧಾಂಜಲಿ 13-9-2012

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ೨೩-೧೦-೨೦೧೦ ರಿಂದ ೧೨-೯-೨೦೧೨ರ ವರೆಗೆ ಅಧ್ಯಕ್ಷರಾಗಿದ್ದ ಪ್ರೊ॥ ಡಿ. ಲಿಂಗಯ್ಯ ಅವರು ದಿನಾಂಕ ೧೨-೯-೨೦೧೨ ರಂದು ಬುಧವಾರ ಸಂಜೆ ಪ್ರತಿಷ್ಠಾನದಲ್ಲಿ ನಡೆಯುತ್ತಿದ್ದ ಸನ್ಮಾನ ಕಾರ್ಯಕ್ರಮದಲ್ಲಿಯೇ ವೇದಿಕೆಯಿಂದ ಕುಸಿದುಬಿದ್ದು ದೈವಾಧೀನವಾದದ್ದು ಅತ್ಯಂತ ದುಃಖದಾಯಕ ಸಂಗತಿ. ಪ್ರತಿಭಾನ್ವಿತ ಹಾಗೂ ಕ್ರಿಯಾಶೀಲರಾಗಿದ್ದ ಜನಪದತಜ್ಞರನ್ನು ಕಳೆದುಕೊಂಡ ಪ್ರತಿಷ್ಠಾನಕ್ಕೆ ಒಮ್ಮೆಗೇ ಅನಾಥಪ್ರಜ್ಞೆ ಕಾಡುತ್ತಿದೆ. ಇದೊಂದು ಪ್ರತಿಷ್ಠಾನ ಎಂದೂ ಮರೆಯಲಾರದ ಅನಿರೀಕ್ಷಿತ ಘಟನೆಯಾಗಿದೆ. ಸನ್ಮಾನಿತರ ಅಕಾಲಿಕ ಮರಣಕ್ಕಾಗಿ ಪ್ರತಿಷ್ಠಾನ ದುಃಖಾರ್ದ್ರ ಹೃದಯದಿಂದ ಅಶ್ರುತರ್ಪಣವನ್ನು ಅರ್ಪಿಸುತ್ತಿದೆ.

ಶ್ರೀಯುತ ದೇವೇಗೌಡ ಲಿಂಗಯ್ಯ ಅವರು ದೇವೇಗೌಡ-ಸಿದ್ಧಮ್ಮ ಅವರ ಸುಪುತ್ರರಾಗಿ ಜನಿಸಿದ್ದು ದಿನಾಂಕ ೧೬ ಡಿಸೆಂಬರ್ ೧೯೩೬, ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಪೀಹಳ್ಳಿಯಲ್ಲಿ. ಇವರ ಕಾವ್ಯನಾಮ 'ದಿನಕರ' ಶ್ರೀಯುತರು ವಿ.ವಿ. ಪುರಂ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌ॥ ಕಾರ್ಯದರ್ಶಿಯಾಗಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಕೋಶಾಧಿಕಾರಿಯಾಗಿ, ವ್ಯವಸ್ಥಾಪಕ ಕಾರ್ಯದರ್ಶಿಯಾಗಿ, ಪ್ರಸ್ತುತ ಅಧ್ಯಕ್ಷರಾಗಿ ಅನನ್ಯ ಸೇವೆಯನ್ನು ಸಲ್ಲಿಸಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, ರಾಜ್ಯೋತ್ಸವ ಪ್ರಶಸ್ತಿ, ದೇವರಾಜ ಬಹದ್ದೂರ್ ಬಹುಮಾನ, ವಿದ್ಯಾವರ್ಧಕ ಸಂಘದ ಬಹುಮಾನ ಮುಂತಾದವಕ್ಕೆ ಭಾಜನರಾಗಿದ್ದರು. ಶ್ರೀಯುತರು ಕವಿಯಾಗಿ, ಜೀವನ ಚರಿತ್ರೆಗಳ ರಚನಕಾರರಾಗಿ, ಜಾನಪದ ಪರಿಷತ್ತಿನ ಸಲಹಾಧಿಕಾರಿಯಾಗಿ, ಗ್ರಂಥಗಳ ಸಂಪಾದಕರಾಗಿ, ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಶ್ಲಾಘನೀಯ ಸೇವೆಯನ್ನು ಸಲ್ಲಿಸಿದವರಾಗಿದ್ದಾರೆ. ೮೫ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿರುವ ಈ ಶಿಸ್ತಿನ ಸಿಪಾಯಿ ಸೂಟ್‌ಧಾರಿ ಸಾಹಿತಿಯೆಂದೇ ಖ್ಯಾತರಾಗಿದ್ದರು.

ಇವರ ಪ್ರಮುಖ ಕೃತಿಗಳು : ಶಿವಪುರ ಧ್ವಜ ಸತ್ಯಾಗ್ರಹ, ಕರ್ನಾಟಕ ಜನಪದ ಕಾವ್ಯಗಳು, ಜನಪದ ಶೋಧನ, ನಾಡಪ್ರಭು ಕೆಂಪೇಗೌಡ. ಕವಿ ಕರೀಂಖಾನ್ ಮುಂತಾದವು.

# ಸಂಪಾದಕೀಯ

'ಕನ್ನಡದ ಕಣ್ವ' ಬಿ.ಎಂ.ಶ್ರೀ. ಅವರ ಹೆಸರಿನಲ್ಲಿ ಸನ್ಮಾನ್ಯ ಪ್ರೊ॥ ಎಂ. ವಿ. ಸೀತಾರಾಮಯ್ಯ ಅವರು 1979 ರಲ್ಲಿ ಸ್ಥಾಪಿಸಿರುವ ಸಂಸ್ಥೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ. ಇದು ನಿರಂತರ ಸಾಹಿತ್ಯಿಕ ಸಾಂಸ್ಕೃತಿಕ ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ನಡಿಸಿಕೊಂಡು ಬರುತ್ತಿದೆ. ಹಲವು ಸಾಹಿತ್ಯಾಸಕ್ತರು ತಮ್ಮ ತಂದೆ–ತಾಯಿ, ಬಂಧು–ಮಿತ್ರರ ಹೆಸರಿನಲ್ಲಿ ಪುದುವಟ್ಟು ಇಟ್ಟು, ಅವರ ಹೆಸರಿನಲ್ಲಿ ಪ್ರತಿವರ್ಷವೂ ನಿಗಧಿತ ಸಮಯದಲ್ಲಿ ಸಾಹಿತ್ಯಿಕ ಕಾರ್ಯಕ್ರಮ/ ಪುಸ್ತಕ ಬಹುಮಾನ ವಿತರಿಸಲು ಸೂಚಿಸಿರುತ್ತಾರೆ. ಅದರಂತೆ ನಾವು ಸುಮಾರು 40 ಕಾರ್ಯಕ್ರಮಗಳನ್ನು ಪ್ರತಿವರ್ಷವೂ ನಡೆಸಿಕೊಂಡು ಬರುತ್ತಿದ್ದೇವೆ. ಬಹಳಷ್ಟು ಪುದುವಟ್ಟು ದಾನಿಗಳು ಬಹಳ ಹಿಂದೆಯೇ ಕಡಿಮೆ ಹಣವನ್ನು, ಈ ಕಾರ್ಯಕ್ರಮ ನಿರಂತರ ನಡೆಸಿಕೊಂಡು ಬರಲು ಇರಿಸಿರುತ್ತಾರೆ. ಈಗಿನ ದಿನದಲ್ಲಿ ಬ್ಯಾಂಕ್ ಬಡ್ಡಿದರ ಪ್ರತಿ ವರ್ಷವೂ ಕಡಿಮೆ ಆಗುತ್ತಿರುವ ವಿಷಯ ತಮಗೆಲ್ಲಾ ತಿಳಿದಿರುವ ವಿಷಯ. ಒಂದು ದಿನ, ಒಂದು ದತ್ತಿ ಕಾರ್ಯಕ್ರಮ (ಉಪನ್ಯಾಸ/ಪುಸ್ತಕ ಬಹುಮಾನ) ಪ್ರತ್ಯೇಕವಾಗಿ ನಡೆಸಲು ನಮಗೆ ಸುಮಾರು ರೂ. 40,000/– ಬೇಕಾಗುತ್ತಿರುವುದರಿಂದ ಕಡಿಮೆ ಹಣವನ್ನು ಪುದುವಟ್ಟು ಇಟ್ಟಿರುವ ದತ್ತಿ ಕಾರ್ಯಕ್ರಮಗಳನ್ನು 2–3 ಒಟ್ಟಾಗಿ ಸೇರಿಸಿ ಕಾರ್ಯಕ್ರಮವೊಂದನ್ನು ನಡೆಸುತ್ತಿದ್ದೇವೆ. ದತ್ತಿ ದಾನಿಗಳು ಹೆಸರಿಸಿರುವ ದತ್ತಿ ಕಾರ್ಯಕ್ರಮಗಳನ್ನು ಪ್ರತ್ಯೇಕವಾಗಿ ಒಬ್ಬರ ಹೆಸರಿನಲ್ಲೇ ಮಾಡಲು ಬಯಸಿದರೆ ತಾವು ಇಟ್ಟಿರುವ ದತ್ತಿ ಹಣ (ಪುದುವಟ್ಟು)ವನ್ನು 40,000/– ರೂ.ಗೆ ಏರಿಸಬೇಕಾಗುತ್ತದೆ ಎಂದು ವಿನಮ್ರವಾಗಿ ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇವೆ., ದಯವಿಟ್ಟು ದತ್ತಿದಾನಿಗಳು ಈ ಕೋರಿಕೆಗೆ ಸ್ಪಂದಿಸಿ ಕಾರ್ಯಕ್ರಮ ಯಶಸ್ವಿಯಾಗಿ ನಡೆಸಲು ಸಹಕರಿಸಬೇಕೆಂದು ವಿನಂತಿಸಿಕೊಳ್ಳುತ್ತಿದ್ದೇವೆ.

ಈಗಿನ ದಿನಗಳಲ್ಲಿ ವಿದ್ಯುನ್ಮಾದ ಸೌಕರ್ಯ ಹೆಚ್ಚಿರುವ ಹಿನ್ನೆಲೆಯಲ್ಲಿ ತಮ್ಮನ್ನು ಶೀಘ್ರಗತಿಯಲ್ಲಿ ಸಂಪರ್ಕಿಸಲು ಅನುಕೂಲವಾಗುವಂತೆ ತಮ್ಮ ಮೊಬೈಲ್, ಟಲಿಫೋನ್ ನಂಬರ್, ಇ–ಮೇಲ್, ಫ್ಯಾಕ್ಸ್ ನಂಬರ್ ಮುಂತಾದುವನ್ನು ಪ್ರತಿಷ್ಠಾನದಲ್ಲಿ ನೋಂದಾಯಿಸಿಕೊಳ್ಳಲು ವಿನಂತಿಸಿಕೊಳ್ಳುತ್ತಿದ್ದೇವೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಖ್ಯಾತ ಸಾಹಿತಿ ಪ್ರೊ॥ ಜಿ. ಅಬ್ದುಲ್ ಬಷೀರ್, (ನಿವೃತ್ತ ಪ್ರಾಧ್ಯಾಪಕರು, ಎ.ಪಿ.ಎಸ್. ಕಾಲೇಜು) ಇವರನ್ನು ಕಾರ್ಯಕಾರಿ ಸಮಿತಿವತಿಯಿಂದ ದಿನಾಂಕ 28–7–2012 ರಿಂದ, ಪ್ರಸ್ತುತ ಗೌರವ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಹಿರಿಯ ಸಾಹಿತಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಜೊತೆ, ಕಾರ್ಯದರ್ಶಿಯಾಗಿ ನಿಯುಕ್ತಗೊಂಡಿದ್ದಾರೆಂದು ತಿಳಿಸಲು ಹರ್ಷಿಸುತ್ತೇವೆ.

ಸಂಪಾದಕರು
ಶ್ರೀ ಎಸ್. ವಿ. ಶ್ರೀನಿವಾಸರಾವ್

# ಪ್ರತಿಷ್ಠಾನದ ವಾರ್ತೆ

**2-7-2012 ಸಂಜೆ 5-30ಕ್ಕೆ ಸೂ. ವೆಂ. ಅರಗ ದತ್ತಿ ಕಾರ್ಯಕ್ರಮ** ಏರ್ಪಡಿಸಲಾಗಿತ್ತು. ಖ್ಯಾತ ಸಾಹಿತಿ ಡಾ॥ ಎಚ್. ಎಂ. ಮರುಳಸಿದ್ಧಯ್ಯ ಅವರು ಕಾರ್ಯಕ್ರಮ ಉದ್ಘಾಟಿಸಿ ಸೂ. ವೆಂ. ಅರಗ ಅವರ ಬಹುಮುಖ ವ್ಯಕ್ತಿತ್ವವನ್ನು ಪ್ರಶಂಸಿದರು. ಖ್ಯಾತ ವಿದ್ವಾಂಸರಾದ ಪ್ರೊ॥ ಅ. ರಾ. ಮಿತ್ರರವರು 'ಜಾನಪದ-ಶಿಷ್ಟ' ವಿಷಯದ ಮೇಲೆ ಮೌಲಿಕ ಉಪನ್ಯಾಸ ನೀಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ॥ ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಅತಿಥಿಗಳ ಪರಿಚಯ ಮಾಡಿಸಿ ಎಲ್ಲರನ್ನೂ ಸ್ವಾಗತಿಸಿದರು. ಸೂ. ವೆಂ. ಅರಗರವರ ಮಗ ಶ್ರೀ ರಮೇಶ್ ಅವರು ತಮ್ಮ ತಂದೆಯ ಬಹುಶ್ರುತ ಪ್ರತಿಭೆಯ ಮೇಲೆ ಬೆಳಕು ಚೆಲ್ಲಿದರು. ಕೊನೆಯಲ್ಲಿ ಪ್ರತಿಷ್ಠಾನದ ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ವಂದನಾರ್ಪಣೆ ಸಲ್ಲಿಸಿದರು.

**14-8-12 ಸಂಜೆ 5-30ಕ್ಕೆ 'ಸಿರಿಕಂಟ' ವೇದಿಕೆ ವತಿಯಿಂದ 'ಸ್ವಾತಂತ್ರ್ಯೋತ್ಸವಕವಿಗೋಷ್ಠಿ'ಯುನ್ನು ಏರ್ಪಡಿಸಲಾಗಿತ್ತು.** ಖ್ಯಾತ ಹಿರಿಯ ಕವಿ ಡಾ॥ ಸುಮತೀಂದ್ರ ನಾಡಿಗ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. 18 ಹಿರಿಯ, ಕಿರಿಯ ಕವಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿ ವೈವಿಧ್ಯಪೂರ್ಣ ಕಾವ್ಯಲಹರಿಯನ್ನು ಹರಿಸಿದರು. ಭಾಗವಹಿಸಿದ ಎಲ್ಲಾ ಕವಿಗಳಿಗೂ ಪ್ರೋತ್ಸಾಹ ರೂಪದಲ್ಲಿ ಪ್ರತಿಷ್ಠಾನದ ಗ್ರಂಥಗಳನ್ನು ನೆನಪಿನ ಕಾಣಿಕೆಯನ್ನಾಗಿ ಕೊಡಲಾಯಿತು. ಈ ವೈಶಿಷ್ಟ್ಯಪೂರ್ಣ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ॥ ಡಿ. ಲಿಂಗಯ್ಯ ಅವರು ವಹಿಸಿ ಪ್ರತಿಷ್ಠಾನದ ಸದಸ್ಯಲ್ಲಿರುವ ಕವಿತಾಶಕ್ತಿಯನ್ನು ಹೊರಹೊಮ್ಮಿಸುವ ಸಲುವಾಗಿ ಈ ವೇದಿಕೆಯನ್ನು ಅವರಿಗೆ ಒದಗಿಸಿ ಕೊಡಲಾಯಿತೆಂದು ತಿಳಿಸಿ, ಪ್ರತಿವರ್ಷವೂ ಈ ಕಾರ್ಯಕ್ರಮವನ್ನು ಮುಂದುವರಿಸುವ ಉದ್ದೇಶ ವಿದೆಯೆಂದೂ ತಿಳಿಸಿದರು. ಡಾ॥ ಸುಮತೀಂದ್ರ ನಾಡಿಗ್‌ರವರು ಸದಸ್ಯರ ಕವಿತೆಗಳನ್ನು ವಿಮರ್ಶಿಸಿ, ಕವಿತೆಯ ರಚನೆಯ ಆಶಯ, ವಸ್ತು, ರಚನಾ ವಿನ್ಯಾಸ, ಸ್ಫೂರ್ತಿ, ಕಲ್ಪನೆ ಮೇಲೆ ಸೂಕ್ತ ಮಾಹಿತಿ ನೀಡಿ ಸದಸ್ಯರ ಪ್ರಯತ್ನವನ್ನು ಶ್ಲಾಘಿಸಿ, ಶುಭ ಆಶಿಸಿದರು.



ಸ್ವಾತಂತ್ರ್ಯೋತ್ಸವ ಕವಿಗೋಷ್ಠಿ, ದಿನಾಂಕ : 14-8-2012

ಕಾರ್ಯಕ್ರಮದ ಪ್ರಾರಂಭದಲ್ಲಿ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳನ್ನು ಪರಿಚಯ ಮಾಡಿಸಿ ಸ್ವಾಗತಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಎಂ. ಎಸ್. ರಾಮಪ್ರಸಾದ್ ವಂದನಾರ್ಪಣೆ ಸಲ್ಲಿಸಿದರು

**16-8-2012 ಸಂಜೆ 5-45 ಗಂಟೆಗೆ ವಿ.ಸೀ. ದತ್ತಿ ಹಾಗೂ ಡಾ॥ ಡಿ. ವಿ. ಗುಂಡಪ್ಪರವರ ದತ್ತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು.** ನಿವೃತ್ತ ಖ್ಯಾತ ಸಂಸ್ಕೃತದ ಪ್ರಾಧ್ಯಾಪಕಿ ಡಾ॥ ಬಿ. ಎನ್. ಸುಮಿತ್ರಾಬಾಯಿಯವರು ವಿ.




16-8-2012 ರಂದು ವಿ.ಸೀ. ದತ್ತಿ ಮತ್ತು ಡಾ॥ ಡಿ. ವಿ. ಗುಂಡಪ್ಪ ದತ್ತಿ ಕಾರ್ಯಕ್ರಮಗಳು

ಸೀತಾರಾಮಯ್ಯ ಅವರ ಕಾವ್ಯಪ್ರತಿಭೆಯ ಮೇಲೆ ವಿಚಾರಪೂರ್ಣ ಉಪನ್ಯಾಸ ನೀಡಿದರು. ನಿವೃತ್ತ ನ್ಯಾಯಾಧೀಶ, ಶ್ರೀ ಎಸ್. ಬಿ. ಶ್ರೀನಿವಾಸನ್ ಅವರು ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ದ ಬಗ್ಗೆ ಉಪನ್ಯಾಸ ನೀಡಿ, ಹಾಡಿ, ನೂರಾರು ಕನ್ನಡ ಪದ್ಯಗಳನ್ನು ಉದಾಹರಿಸಿ, ಕಗ್ಗದ ವೈಶಿಷ್ಟ್ಯವನ್ನು ಬಣ್ಣಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ

ಪ್ರೊ॥ ಡಿ. ಲಿಂಗಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಡಿ.ವಿ.ಜಿ.ಯವರ ಜೀವನ ಹಾಗೂ ಕಾವ್ಯ ಪ್ರತಿಭೆಯ ಮೇಲೆ ಮೌಲಿಕ ಮಾಹಿತಿ ನೀಡಿದರು. ಪ್ರಾರಂಭದಲ್ಲಿ ಗೌ॥ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳನ್ನು ಪರಿಚಯಿಸಿ, ಸ್ವಾಗತಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಎಂ. ಎಸ್. ರಾಮಪ್ರಸಾದ್ ವಂದನಾರ್ಪಣೆ ಮಾಡಿದರು.

**ದಿನಾಂಕ ೭-೯-೨೦೧೨ ರಂದು ದ. ರಾ. ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಮತ್ತು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸಂಯುಕ್ತವಾಗಿ** ಆಯೋಜಿಸಿದ ಕಾರ್ಯಕ್ರಮ 'ಕನ್ನಡ ತಲೆಯೆತ್ತುವ ಬಗೆ' ಭಾಷಣದ ೧೧೧ನೇ ವರ್ಷದ ಅರಿವು) ಈ ಕಾರ್ಯಕ್ರಮ ಧಾರವಾಡದ ಆಲೂರು ವೆಂಕಟರಾವ್ ಸಭಾಭವನದಲ್ಲಿ ಜರುಗಿತು.

ಕಾರ್ಯಕ್ರಮದ ಉದ್ಘಾಟನೆ ಸನ್ಮಾನ್ಯ ಡಾ॥ ಶ್ರೀನಿವಾಸ ರಿತ್ತಿ (ಅಧ್ಯಕ್ಷರು, ಆಲೂರು ವೆಂಕಟರಾವ್ ಟ್ರಸ್ಟ್ ಧಾರವಾಡ) ಅವರಿಂದ ಜರುಗಿತು. ಬಿ.ಎಂ.ಶ್ರೀ. ಅವರ ಕಾವ್ಯ ಸಾಧನೆ ಕುರಿತು ಡಾ॥ ಶ್ರೀಧರ್ ಹೆಗಡೆ ಭದ್ರನ್‌ರವರು, ಶ್ರೀಯವರ ನಾಟಕ ಸಾಹಿತ್ಯ ಕುರಿತು ಶ್ರೀಮತಿ ಅನುಪಮ ಢವಳೆ ಅವರು,



**ದಿನಾಂಕ 7-9-2012 ರಂದು ದ. ರಾ. ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಮತ್ತು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಗಳು ಜಂಟಿಯಾಗಿ ನಡೆಸಿದ ಕಾರ್ಯಕ್ರಮ-'ಕನ್ನಡವು ತಲೆಯೆತ್ತುವ ಬಗೆ'**

'ಶ್ರೀ'ರವರ ವಿಚಾರಧಾರೆ ಕುರಿತು ಡಾ॥ ಆರ್. ಬಿ. ಚಿಲುಮೆಯವರು, ಐತಿಹಾಸಿಕ ಮಹತ್ವ ಕುರಿತು ಶ್ರೀ ಶ್ರೀನಿವಾಸ ವಾಡಪ್ಪಿಯವರು, ಭಾಷಾ ಕಲಿಕೆಯ ಸಾಧ್ಯತೆ ಕುರಿತು ಶ್ರೀ ಹರೀಶಕುಮಾರ್‌ರವರು ಪ್ರಬಂಧ ಮಂಡಿಸಿದರು ಪ್ರಾಸ್ತಾವಿಕ ಹಾಗೂ ಸಮಾರೋಪ ಭಾಷಣಗಳನ್ನು ಡಾ॥ ಶ್ಯಾಮಸುಂದರ ಬಿದರಕುಂದಿ ಅವರು (ಅಧ್ಯಕ್ಷರು ದ. ರಾ. ಬೇಂದ್ರೆ ಟ್ರಸ್ಟ್) ಮಾಡಿದರು., ಕುಮಾರ ರೋಹಿತ ಜಾಡರ ಮತ್ತು ಕುಮಾರಿ ಸಿಂಧೂರವರು ಬಿ.ಎಂ.ಶ್ರೀ. ಅವರ ಗೀತೆಗಳನ್ನು ಹಾಡಿ ಸಭಿಕರನ್ನು ರಂಜಿಸಿದರು.

**೧೨-೯-೨೦೧೨ ಸಂಜೆ ೫-೩೦ ರಿಂದ ಪ್ರೊ॥ ಎಂ.ವಿ.ಸೀ. ಪ್ರಶಸ್ತಿಪ್ರದಾನ ಕಾರ್ಯಕ್ರಮ ಮತ್ತು ಪ್ರತಿಷ್ಠಾನದ ಹಿರಿಯ ಗೌರವ ಸದಸ್ಯರಿಗೆ ಸನ್ಮಾನ**

ಪ್ರೊ॥ ಎಂ.ವಿ.ಸೀ. ಪ್ರಶಸ್ತಿಯನ್ನು ಶತಾಯು ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರು ಆದಾಯ ತೆರಿಗೆ



**12-9-12 ಸಂಜೆ 5-30 ರಿಂದ ಪ್ರೊ॥ ಎಂ.ವಿ.ಸೀ. ಪ್ರಶಸ್ತಿಪ್ರದಾನ ಸಮಾರಂಭ ಮತ್ತು ಪ್ರತಿಷ್ಠಾನದ ಹಿರಿಯ ಗೌರವ ಸದಸ್ಯರುಗಳಿಗೆ ಸನ್ಮಾನ.**

ಆಯುಕ್ತರು ಹಾಗೂ ಖ್ಯಾತ ಸಾಹಿತಿಗಳಾದ ಶ್ರೀ ಕೆ. ಸತ್ಯನಾರಾಯಣ ಅವರಿಗೆ ಪ್ರದಾನ ಮಾಡಿದರು. ಡಾ॥ಸುಮತೀಂದ್ರ ನಾಡಿಗ್‌ರವರು ಸನ್ಮಾನಿತರ ಪರಿಚಯ ಮಾಡಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ॥ ಡಿ. ಲಿಂಗಯ್ಯ ಅವರು ಅಧ್ಯಕ್ಷ ಭಾಷಣ ಮಾಡಿದರು.. ಈ ಕಾರ್ಯಕ್ರಮದ ಜೊತೆ ಜೊತೆಯಲ್ಲಿ ಪ್ರತಿಷ್ಠಾನದ ಹಿರಿಯ ಗೌರವ




**12-9-12 ಪ್ರೊ॥ ಎಂ.ವಿ.ಸೀ. ಪ್ರಶಸ್ತಿ ಪ್ರದಾನ ಕಾರ್ಯಕ್ರಮ ಮತ್ತು ಪ್ರತಿಷ್ಠಾನದ ಹಿರಿಯ ಗೌರವ ಸದಸ್ಯರುಗಳಿಗೆ ಸನ್ಮಾನ.**

ಸದಸ್ಯರುಗಳಾದ ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ, ಪ್ರೊ॥ ಎಲ್. ಎಸ್. ಶೇಷಗಿರಿರಾವ್, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ ಅವರುಗಳ ಪ್ರಶಂಸನೀಯ ಸೇವೆಯನ್ನು ಪ್ರೊ॥ ಡಿ. ಲಿಂಗಯ್ಯ ಕೊಂಡಾಡಿದರು. ಗೌ॥ ಅಧ್ಯಕ್ಷರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು ಹಿರಿಯರಿಗೆ ಶಾಲು ಹೊದಿಸಿ, ಹೂಹಾರ ಹಾಕಿ ಸನ್ಮಾನಿಸಿದರು.

ಈ ಕಾರ್ಯಕ್ರಮ ನಡೆಯುತ್ತಿದ್ದಾಗಲೇ ಒಂದು ಅವಗಢ ಜರುಗಿ ಹೋಯಿತು. ಮಾತನಾಡುತ್ತಿದ್ದ ಪ್ರೊ॥ ಡಿ. ಲಿಂಗಯ್ಯ ಅವರು ಇದ್ದಕ್ಕಿದ್ದಂತೆಯೇ ಕುಸಿದುಬಿದ್ದು ವಿಧಿವಶರಾದ ಹೃದಯ ವಿದ್ರಾವಕ ಘಟನೆ ಜರುಗಿ ಎಲ್ಲರನ್ನು ದಿಗ್ಭ್ರಾಂತಗೊಳಿಸಿತು. ಶೋಕಸಾಗರದಲ್ಲಿ ಮುಳುಗಿಸಿತು.

**೧೩-೯-೨೦೧೨'ಶ್ರದ್ಧಾಂಜಲಿ ಕಾರ್ಯಕ್ರಮ** : ದಿನಾಂಕ ೧೨-೯-೧೨ ರಂದು ನಿಧನರಾದ ಪ್ರೊ॥ ಡಿ. ಲಿಂಗಯ್ಯ ಅವರಿಗೆ ಶ್ರದ್ಧಾಂಜಲಿ ಅರ್ಪಿಸಲು ಪ್ರತಿಷ್ಠಾನ ಆಯೋಜಿಸಿತ್ತು. ಈ ಕಾರ್ಯಕ್ರಮ ಪ್ರೊ॥ ಡಿ. ಲಿಂಗಯ್ಯ ಅವರ ಅಭಿಮಾನಿಗಳ ದೊಡ್ಡ ಸಮೂಹವೇ ಸೇರಿತ್ತು ಪ್ರೊ॥ ಅ. ರಾ. ಮಿತ್ರ, ಪ್ರೊ॥ಎಂ. ಎಚ್. ಕೃಷ್ಣಯ್ಯ, ಪ್ರೊ॥ ಎನ್. ಬಸವಾರಾಧ್ಯ, ಡಾ॥ ಎಂ. ಚಿದಾನಂದಮೂರ್ತಿ, ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಪ್ರೊ॥ ಜಿ. ಅಬ್ದುಲ್ ಬಷೀರ್ ಡಾ॥ ಕೊ. ವೆಂ. ರಾಮಕೃಷ್ಣೇಗೌಡ, ಶ್ರೀ ಕೋಡಿ ಹೊಸಳ್ಳಿ ರಾಮಣ್ಣ ಮುಂತಾದ ಗಣ್ಯರ ಜೊತೆಯಲ್ಲಿ ಪ್ರತಿಷ್ಠಾನದ ಕಾರ್ಯಕಾರಿ, ಸಮಿತಿ ಸದಸ್ಯರು ಹಾಗೂ ಹಲವು ಅಭಿಮಾನಿಗಳು ಭಾಗವಹಿಸಿದ್ದರು. ತುಂಬಿದ್ದ ಸಭೆ ದುಃಖಾರ್ದ್ರ ಹೃದಯದಿಂದ ದಿವಂಗತರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಿತು.



### ಸ್ವರ್ಗೀಯ ಶ್ರೀ ಡಿ. ಲಿಂಗಯ್ಯನವರಿಗೆ ಅಶ್ರುತರ್ಪಣ

ಮಾನ್ಯ ಶ್ರೀ ಲಿಂಗಯ್ಯನವರೇ,
ಹೀಗೆ ಹೊರಟಿದ್ದು ಸರಿಯೇ ?
ಜಾನಪದವನು ದಾಖಲಿಸಿದಿರಿ
ಸಾಹಿತ್ಯಲೋಕವ ಬೆಳಗಿದಿರಿ

ಪ್ರತಿದಿನ ಪಠಿಸಿದಿರಿ ಬಿ.ಎಂ.ಶ್ರೀ ಶ್ರೀಕಾರ
ಅನುದಿನ ಜಪಿಸಿದಿರಿ ಎಂ.ವಿ.ಸೀ. ಸಾಕಾರ
ಕಿರಿಯರ ಹರಸಿದಿರಿ ಈ ದಿನ
ಹಿರಿಯರ ಸನ್ಮಾನಿಸಿದಿರಿ ತುಂಬಿ ಮನ

ನೋವೆಂದು ನರಳಲಿಲ್ಲ
ಸಾವಿನಲೂ ಕೊರಗಲಿಲ್ಲ
ಲೌಕಿಕರೆಂದರು : ನಿಮಗಾದದ್ದು ಹೃದಯ ಸ್ತಂಭನ
ಅನುಭವಿಳೆಂದರು : ನಿಮ್ಮದು ತೃಪ್ತ ತುಂಬು ಜೀವನ

ನೀವೇನೋ ಹೊರಟುಬಿಟ್ಟಿರಿ ಆಕಸ್ಮಿಕವಾಗಿ
ನಾವು ಕಳೆದುಕೊಂಡದ್ದು ಅಮೂಲ್ಯ ನಿಧಿ
ನಿಮ್ಮ ನುಡಿಗಳೆಮಗೆ ದಿವ್ಯ ಮಂತ್ರ
ನಿಮ್ಮ ನಡೆಯೆಮಗೆ ಸಾಧನ ಸೂತ್ರ

ಶರಣರ ಗುಣ ಕಾಣುವುದಂತೆ ಮರಣದಲ್ಲಿ
ಲಿಂಗಯ್ಯನವರ ಸ್ವರ್ಗಾರೋಹಣ ಬಿ.ಎಂ.ಶ್ರೀ
ಪ್ರತಿಷ್ಠಾನದಲ್ಲಿ

**ಬಿ.ಎಂ.ಶ್ರೀ ಪ್ರತಿಷ್ಠಾನದ ಸಕಲ ಸದಸ್ಯರ ಪರವಾಗಿ**

ತಾ॥ ೧೨-೯-೨೦೧೨

ಶ್ರೀ ನಂದನ ನಾಮ ಸಂವತ್ಸರ-ದಕ್ಷಿಣಾಯನ-ವರ್ಷಋತು -ಅಧಿಕ ಭಾದ್ರಪದ ಮಾಸ-ಕೃಷ್ಣಪಕ್ಷ-ಏಕಾದಶಿ-ಬುಧವಾರ ಸಂಜೆ

-ಶ್ರೀ ಶಿವರಾಂ

## ಅಭಿನಂದನೆಗಳು

೧. **ರಾಷ್ಟ್ರೀಯ ಬಸವ ಪುರಸ್ಕಾರ** : (೨೦೧೦) ಈ ಸಾಲಿನ ಪುರಸ್ಕಾರಕ್ಕೆ ಡಾ॥ ದೇ. ಜವರೇಗೌಡ, ೨೦೦೯ನೇ ಸಾಲಿನ ಪ್ರಶಸ್ತಿಗೆ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಗದಗ. ೨೦೦೮ನೇ ಸಾಲಿನ ಪ್ರಶಸ್ತಿಗೆ ಬಾಗಲಕೋಟೆ ಜಿಲ್ಲೆಯ ಇಳಕಲ್ಲಿನ ಚಿತ್ತರಗಿ ವಿಜಯಮಹಾಂತೇಶ್ವರ ಸಂಸ್ಥಾನ ಮಠದ ಡಾ॥ ಮಹಾಂತ ಸ್ವಾಮಿಜಿ, ೨೦೧೧ನೇ ಸಾಲಿನ ಪ್ರಶಸ್ತಿ ಶ್ರೀ ರಂಜಾನ್‌ದರ್ಗ ಅವರಿಗೆ ಸಂದಿವೆ.

೨. **೧೩ನೇ ರಾಷ್ಟ್ರಾಧ್ಯಕ್ಷರಾಗಿ ಶ್ರೀ ಪ್ರಣವ್ ಮುಖರ್ಜಿಯವರು** ದಿನಾಂಕ ೨೫-೯-೨೦೧೨ ರಂದು ದೆಹಲಿಯಲ್ಲಿ ಅಧಿಕಾರ ಸ್ವೀಕರಿಸಿದ್ದಾರೆ.

೩. **ಕರ್ನಾಟಕ ಭಾಷಾ ಭೂಷಣ ಪ್ರಶಸ್ತಿ** : ದಿನಾಂಕ ೨೯-೭-೨೦೧೨ ರಂದು ಕರ್ನಾಟಕ ಸರ್ಕಾರ, ನಿಘಂಟು ತಜ್ಞ, **ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ** ಅವರಿಗೆ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.

೪. **ದಿನಾಂಕ ೩-೭-೨೦೧೨ ರಂದು ಡಾ॥ ವೀರಪ್ಪ ಮೊಯಿಲಿಯವರಿಗೆ** ಇಂದನ ಇಲಾಖೆಯನ್ನೂ ಹೆಚ್ಚುವರಿಯಾಗಿ ನೀಡಲಾಗಿದೆ ಎಂದು ಭಾರತ ಸರ್ಕಾರದ ಪ್ರಕಟಣೆ ತಿಳಿಸುತ್ತಿದೆ.

೫. **'ಪಂಪ ಪ್ರಶಸ್ತಿ'** : (೨೦೧೧) ಪ್ರೊ॥ ಬರಗೂರು ರಾಮಚಂದ್ರಪ್ಪ ಅವರು ಈ ಪ್ರತಿಷ್ಠಿತ ಪ್ರಶಸ್ತಿಗೆ ಭಾಜನರಾಗಿದ್ದಾರೆ.

೬. **ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ** : ಧಾರವಾಡದ ಶ್ರೀ ವಿ. ಪಿ. ಹಿರೇಗೌಡರ್ ಆಯ್ಕೆಗೊಂಡಿದ್ದಾರೆ.

೭. **ಶಾಂತಲಾ ನಾಟ್ಯ ಪ್ರಶಸ್ತಿ** : ಬೆಂಗಳೂರಿನ ನೃತ್ಯ ಗುರು ಶ್ರೀಮತಿ ಲಲಿತಾ ಶ್ರೀನಿವಾಸನ್ ಆಯ್ಕೆಗೊಂಡಿದ್ದಾರೆ.

೮. **ದೇವರಾಜ ಪ್ರಶಸ್ತಿ** : ವಿಭಾಗ ಮಟ್ಟದ ಪ್ರಶಸ್ತಿ ಚಿತ್ರದುರ್ಗ ಜಿಲ್ಲೆಯ ಬೆಳಗೆರೆಯ ಶ್ರೀ ಶಾರದಾ ವಿದ್ಯಾ ಸಂಸ್ಥೆಯಲ್ಲಿ **ಬೆಳಗೆರೆ ಕೃಷ್ಣಶಾಸ್ತ್ರಿ** ಅವರಿಗೆ ಸಂದಿದೆ.

೯. **ಅತ್ತಿಮಬ್ಬೆ ಪ್ರತಿಷ್ಠಾನ** : 'ಮನುಶ್ರೀ' ರಾಷ್ಟ್ರೀಯ ದತ್ತಿಪ್ರಶಸ್ತಿ : ಹಿರಿಯ ವಿದ್ವಾಂಸ ಪ್ರೊ॥ ಜಿ. ಬ್ರಹ್ಮಪ್ಪ ಅವರಿಗೆ ಸಂದಿದೆ. (ದತ್ತಿ ಪ್ರಶಸ್ತಿ ೧೦,೦೦೦ ರೂ.ಗಳನ್ನು ಶ್ರೀಯುತರು ಪ್ರತಿಷ್ಠಾನಕ್ಕೆ ಹಿಂತಿರುಗಿಸಿದ್ದಾರೆ.)

೧೦. **ದೇವರಾಜ ಅರಸು ಪ್ರಶಸ್ತಿ** : ರಾಜ್ಯಮಟ್ಟದ ಪ್ರಶಸ್ತಿಯು ಪ್ರಜಾವಾಣಿ ಸಹ ಸಂಪಾದಕ ಶ್ರೀ ದಿನೇಶ್ ಅಮಿನ್‌ಮಟ್ಟು ಅವರಿಗೆ ಸಂದಿದೆ. (೨೮-೮-೨೦೧೨).

೧೧. **ಅನುಪಮಾ ಪ್ರಶಸ್ತಿ** : (೨೦೧೨) ಲೇಖಕಿಯರ ಸಂಘ ನೀಡುವ ಈ ಪ್ರಶಸ್ತಿ ಡಾ॥ ಬಿ. ಎನ್. ಸುಮಿತ್ರಾಬಾಯಿಯವರಿಗೆ ಸಂದಿದೆ.

೧೨. **ಹೆಚ್. ವಿ. ಸಾವಿತ್ರಮ್ಮ ದತ್ತಿ ಪ್ರಶಸ್ತಿ** : (೨೦೧೨) ಖ್ಯಾತ ಸಾಹಿತಿ ಡಾ॥ ವಿಜಯಾ ಸುಬ್ಬರಾಜ್ ಅವರ ಕೃತಿ 'ಸೂರ್ಯಕಾಂತಿಗಳ ಮಡಿಲಲ್ಲಿ' ಕೃತಿಗೆ ಸಂದಿದೆ. (೨೭-೮-೨೦೧೨).

೧೩. **ಡಾ॥ ಎಂ. ಎಂ. ಮುನ್ಷಿ ಸಮ್ಮಾನ್ : ಖ್ಯಾತ ನಿಘಂಟು ತಜ್ಞ ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ** ಅವರಿಗೆ ೧೦೦ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಭಾರತೀಯ ವಿದ್ಯಾ ಭವನದಲ್ಲಿ ರಾಜ್ಯಪಾಲ ಶ್ರೀ ಹಂಸರಾಜ ಭಾರದ್ವಾಜ್ ಅವರು ಪ್ರಶಸ್ತಿ ಪ್ರದಾನ ಮಾಡಿದರು. (೨೩-೮-೨೦೧೨).

೧೪. **ಜಕಣಾಚಾರಿ ಪ್ರಶಸ್ತಿ** : (೨೦೧೦) ಹಿರಿಯ ಶಿಲ್ಪಿ ಶ್ರೀ ಕನಕಾಮೂರ್ತಿ ಆಯ್ಕೆಗೊಂಡಿದ್ದಾರೆಂದು ಪ್ರಕಟಣೆ ತಿಳಿಸುತ್ತದೆ. ೨೫-೮-೨೦೧೨.

೧೫. **ಬಾಲಸಾಹಿತ್ಯ ಪುರಸ್ಕಾರ** :(೨೦೧೨) ಕೇಂದ್ರ ಸಾಹಿತ್ಯ ಅಕಾಡೆಮಿ ನೀಡುವ ಈ ವಿಶಿಷ್ಟ ಪ್ರಶಸ್ತಿಗೆ ಮಕ್ಕಳ ಸಾಹಿತಿ ಶ್ರೀ ಪಳಕಳ ಸೀತಾರಾಮಭಟ್ಟರು ಭಾಜನ ರಾಗಿದ್ದಾರೆ.

**ಪ್ರತಿಷ್ಠಾನವು ಮೇಲ್ಕಂಡ ಎಲ್ಲಾ ಪ್ರಶಸ್ತಿ ವಿಜೇತರುಗಳಿಗೆ ಹಾರ್ದಿಕ ಅಭಿನಂದನೆಗಳೊಡನೆ ಶುಭಾಶಯ ಕೋರುತ್ತದೆ.**

# ಪುಸ್ತಕ ಪರಿಚಯ

**1. ಹಸ್ತಪ್ರತಿ ಶಾಸ್ತ್ರಜ್ಞ ಎಸ್. ಶಿವಣ್ಣ**

ಲೇಖಕರು : ಡಾ॥ ಬಿ. ಎಸ್. ಸ್ವಾಮಿ

ಪ್ರಕಾಶಕರು : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

ಪ್ರಕಟಣೆ : 2012

ಪುಟಗಳು : 64. ಬೆಲೆ : 30/–

ಕನ್ನಡ ಸಾಹಿತ್ಯವನ್ನು ಹಲವು ಹಿರಿಯ, ಕಿರಿಯ ಸಾಹಿತಿಗಳು ಸಂಪನ್ನಗೊಳಿಸಿದ್ದಾರೆ. ಕೆಲವು ಹಿರಿಯ ಸಾಹಿತಿಗಳ ಬಗ್ಗೆ ಲೇಖನಗಳು, ಪರಿಚಯ ಗ್ರಂಥಗಳು ಪ್ರಕಟವಾಗಿವೆ. ಆದರೆ ಎರಡನೆ ಶ್ರೇಣಿಗೆ ಸೇರಿದ ಖ್ಯಾತ ಸಾಹಿತಿಗಳು ಎಲೆಮರೆಯಕಾಯಿಯಂತೆ ಹಿಂದೆ ಸರಿದಿದ್ದಾರೆ. ಆದರೆ ಇವರ ಸಾಧನೆ ಸಹ ಗುರುತರವಾದದ್ದು. ದಾಖಲಿಸಲು ಯೋಗ್ಯವಾದದ್ದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನ ಇಂಥವರ ಪರಿಚಯ ಮಾಡಿಸಲು 'ಸಾಹಿತಿ ವಿದ್ವಾಂಸರ ಕಿರುಪುಸ್ತಕ ಮಾಲೆ' ಪ್ರಾರಂಭಿಸಿದೆ. ಈ ಮಾಲೆಯ ಪ್ರಥಮ ಪುಷ್ಪ ಹಸ್ತಪ್ರತಿ ಶಾಸ್ತ್ರಜ್ಞ ಎಸ್. ಶಿವಣ್ಣ' ಇವರು ಶ್ರೇಷ್ಠಮಟ್ಟದ ವಿದ್ವಾಂಸರಾಗಿ ಅನೇಕ ಸಂಶೋಧನಾತ್ಮಕ ಲೇಖನ, ಪುಸ್ತಕಗಳನ್ನು ರಚಿಸಿ ಖ್ಯಾತರಾಗಿದ್ದಾರೆ. ಇತರ ಪರಿಚಯವನ್ನು ಅವರನ್ನು ಆತ್ಮೀಯವಾಗಿ ಬಲ್ಲ ಡಾ॥ ಬಿ. ಎಸ್. ಸ್ವಾಮಿ ಈ ಗ್ರಂಥದಲ್ಲಿ ಪರಿಚಯಿಸಿದ್ದಾರೆ ಹಾಗೂ ಅವರು ಸಾಹಿತ್ಯ ಕ್ಷೇತ್ರಕ್ಕೆ ಸಂಪಾದಿಸಿ ನೀಡಿರುವ ಕೃತಿಗಳ ಲೇಖನಗಳ ಯಾದಿಯನ್ನು ನೀಡಿ ಉಪಕರಿಸಿದ್ದಾರೆ. ಇದೊಂದು ಹಸ್ತಪ್ರತಿ ವಿಜ್ಞಾನದಲ್ಲಿ ಹಾಗೂ ಸಂಶೋಧನಾ ಕ್ಷೇತ್ರದಲ್ಲಿ ಆಸಕ್ತರು ಖಂಡಿತಾ ಇಟ್ಟುಕೊಳ್ಳಬಹುದಾದ ಉಪಯುಕ್ತ ಕೃತಿಯಾಗಿದೆ.

**2. ಬೆಟಗೇರಿ ಕೃಷ್ಣಶರ್ಮ**

ಲೇಖಕರು : ಎಸ್. ವಿ. ಶ್ರೀನಿವಾಸರಾವ್

ಪ್ರಕಾಶಕರು : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು–19

ಪ್ರಕಟಣೆ :2012




ಪುಟಗಳು : 48

ಬೆಲೆ : ರೂ. 20/–

ಇದು ಬಿ. ಎಂ.ಶ್ರೀ ಪ್ರತಿಷ್ಠಾನ ಸಾಹಿತಿ ವಿದ್ವಾಂಸರ ಕಿರುಪುಸ್ತಕ ಮಾಲೆಯಡಿ ಪ್ರಕಟಿಸಿರುವ 2ನೇ ಕೃತಿ ಕನ್ನಡ ನವೋದಯ ಸಾಹಿತ್ಯ ಸಂದರ್ಭದಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ವಿಫುಲವಾಗಿ ಕೃಷಿ ಮಾಡಿ ಕನ್ನಡ ಸಾರಸ್ವತ ಲೋಕವನ್ನು ಸಂಪನ್ನ ಗೊಳಿಸಿದ್ದವರು ಡಾ॥ ಬೆಟಗೇರಿ ಕೃಷ್ಣಶರ್ಮರವರು ಇವರ ಕಾವ್ಯನಾಮ 'ಆನಂದಕಂದ' ಲೇಖಕರು . ಬೆಟಗೇರಿ ಕೃಷ್ಣಶರ್ಮರವರು ಸಂಪೂರ್ಣ ಜೀವನ ವಿವರಗಳನ್ನು ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ ನೀಡಿರುವುದಲ್ಲದೆ ಅವರ ಮೌಲಿಕ ಕೊಡುಗೆಗಳನ್ನು ಪರಿಚಯಿಸಿ, ಈ ಲೇಖಕರ ಬಗ್ಗೆ ಸಾಹಿತ್ಯಾಸಕ್ತರಿಗೆ ಆಸಕ್ತಿ ಕೆರಳಿಸುವಲ್ಲಿ ಯಶಸ್ವಿಯಾಗಿದ್ದಾರೆ, ಇದೊಂದು ವಾಚನೀಯ ಉಪಯುಕ್ತ ಕೃತಿ. ಸಾಹಿತ್ಯ ಪ್ರಿಯರ ಹಾಗೂ ಎಲ್ಲಾ ಗ್ರಂಥಾಲಯಗಳಲ್ಲೂ ಇರಬೇಕಾದ ಕೃತಿಯಾಗಿದೆ.

**3. ಸೃಜನ ಸಾಹಿತ್ಯ–ಎಂ.ವಿ.ಸೀ. ವಾಚಿಕೆ–1 :**




ಸಂಪಾದಕರು : ಶ್ರೀ ಎನ್. ಎಸ್. ಶ್ರೀಧರಮೂರ್ತಿ

ಪ್ರಕಾಶಕರು : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು–19

ಪ್ರಕಟಣೆ : 2012.

ಪುಟಗಳು : 306

ಬೆಲೆ : ರೂ. 150/–

ಖ್ಯಾತ, ಬಹುಮುಖ ಪ್ರತಿಭಾವಂತ ಸಾಹಿತಿ, ವಿದ್ವಾಂಸ ರಾಗಿದ್ದ ಪ್ರೊ॥ ಎಂ. ವಿ. ಸೀತಾರಾಮಯ್ಯ ಅವರ ಸೃಜನಾತ್ಮಕ ಸಾಹಿತ್ಯದ ಸಮಗ್ರ ದರ್ಶನವನ್ನು ಆನೆಯನ್ನು ಕನ್ನಡಿಯಲ್ಲಿ ತೋರಿಸುವಂತೆ ಕಿರಿದಾಗಿ ಈ ಕೃತಿಯಲ್ಲಿ ತೋರಿಸುವ ಪ್ರಯತ್ನವೇ 'ವಾಚಿಕೆ'ಯ ರಚನೆಯ ಹಿನ್ನೆಲೆಯಾಗಿದೆ. ಮೂಲ ಸಾಹಿತ್ಯವನ್ನು ಕೂಲಂಕಷವಾಗಿ ಅಧ್ಯಯನ ಮಾಡಲ ಈ ವಾಚಿಕೆಗಳು ಪ್ರೇರಣೆ ನೀಡಲು ಸಮರ್ಥವಾಗಿರುತ್ತವೆ. ಎಂ.ವಿ.ಸೀ. ಅವರ ಸಾಹಿತ್ಯ ಶೈಲಿಯನ್ನು ಸಾಹಿತ್ಯಿಕ

ಮೌಲ್ಯವನ್ನು ಅರಿಯಲು ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ. ಖ್ಯಾತ ಪತ್ರಕರ್ತರಾದ ಶ್ರೀ ಎನ್. ಎಸ್. ಶ್ರೀಧರಮೂರ್ತಿಯವರು ಅವರ ಅಪಾರ ಸೃಜನಾತ್ಮಕ ಕೃತಿಗಳನ್ನು ಪರಿಶೀಲಿಸಿ ಅವುಗಳಲ್ಲಿನ ಮುಖ್ಯಾಂಶವನ್ನು ಇಲ್ಲಿ ಸಂಗ್ರಹಿಸಿ ನೀಡಿರುತ್ತಾರೆ. ಈ ವಿಶಿಷ್ಟ ವಾಚಿಕೆ ಸಾಹಿತ್ಯಾಸಕ್ತರಿಗೆ ಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.



**4. ಪರಿವಾರ ಮತ್ತು ಇತರ ಕಥೆಗಳು :**

ಲೇಖಕರು : ಪ್ರೊ|| ಎಂ. ವಿ. ಸೀತಾರಾಮಯ್ಯ

ಪ್ರಕಾಶಕರು : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ,ಬೆಂಗಳೂರು-19

ಪ್ರಕಟಣೆ : 2012.

ಪುಟಗಳು : 72

ಬೆಲೆ : ರೂ. 30/-

ಪ್ರೊ|| ಎಂ.ವಿ.ಸೀ. ಅವರ ಬಹಳಷ್ಟು ಕಥೆಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸುತ್ತಿರುವ ಸಮಗ್ರ ಕಥಾ ಸಂಪುಟದಲ್ಲಿ ಸಂಗ್ರಹವಾಗಿವೆ. ಆದರೂ ಇನ್ನೂ ಕೆಲವು ಪ್ರೊ|| ಸೀತಾರಾಮಯ್ಯ ಅವರ ಗೃಹದ ಕಪಾಟಿನಲ್ಲಿದ್ದವುಗಳನ್ನು ಹೆಕ್ಕಿ ತೆಗೆದು ಅವರ ಪುತ್ರ ಶ್ರೀ ಎಂ. ಎಸ್. ಭಾಸ್ಕರ್ ಅವನ್ನು ಪ್ರಕಟಿಸುವ ಸಲುವಾಗಿ ಪ್ರತಿಷ್ಠಾನಕ್ಕೆ ನೀಡಿರುತ್ತಾರೆ. ಈ ಗ್ರಂಥದಲ್ಲಿ 7 ಕಥೆಗಳಿವೆ. ಎಲ್ಲವೂ ಕುತೂಹಲಕಾರಿಯಾಗಿ ಓದಿಸಿಕೊಂಡು ಹೋಗುತ್ತವೆ. ಈ ಪುಟ್ಟ ಕೃತಿ ಎಂ.ವಿ.ಸೀ. ಅವರ ಕಥಾ ಸಂಪುಟಕ್ಕೆ ಸಮಗ್ರತೆಯನ್ನು ನೀಡುತ್ತದೆ. ಸಂಗ್ರಹ ಯೋಗ್ಯಕೃತಿ ಎನ್ನುವುದರಲ್ಲಿ ಸಂದೇಹವಿಲ್ಲ.

## ಶ್ರದ್ಧಾಂಜಲಿ

ಹಿರಿಯ ಪತ್ರಕರ್ತ ವಿ. ಎನ್.ಸುಬ್ಬರಾವ್ (೮೧) ರವರು ದಿನಾಂಕ ೯-೧೦-೧೨ ರಂದು ಬೆಂಗಳೂರಿನಲ್ಲಿ ನಿಧನರಾದರು. ಇವರು ಇಂಡಿಯನ್ ಎಕ್ಸ್‌ಪ್ರೆಸ್, ಟೈಮ್ಸ್ ಆಫ್ ಇಂಡಿಯಾ ಡೆಕ್ಕನ್ ಹೆರಾಲ್ಡ್, ಸಂಯುಕ್ತ ಕರ್ನಾಟಕ, ಸ್ಕ್ರೀನ್, ತಾರಾಲೋಕ ಮುಂತಾದವಲ್ಲಿ ಸೇವೆ ಸಲ್ಲಿಸಿದ್ದರು. ಪತ್ರಿಕಾ ಅಕಾಡೆಮಿ ಹಾಗೂ ಸುಚಿತ್ರಾ ಫಿಲ್ಮ್ ಸೊಸೈಟಿ ಅಧ್ಯಕ್ಷರಾಗಿದ್ದ ಹೆಗ್ಗಳಿಕೆ ಇವರದು.

**ಸುದರ್ಶನ ದೇಸಾಯಿ** : (೬೮ ವರ್ಷ) ಪತ್ತೆದಾರಿ ಕಾದಂಬರಿಗಳ ನಿರ್ಮಾಣದಲ್ಲಿ ಖ್ಯಾತರಾಗಿದ್ದ ಇವರು ದಿನಾಂಕ ೩೧-೭-೧೨ ರಂದು ನಿಧನರಾದರು. ೧೦೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ಹೆಗ್ಗಳಿಕೆ ಇವರದು. ಜೀವಿತ ಕಾಲ : ೧೪-೧-೧೯೪೫ ರಿಂದ ೩೧-೭-೧೨

**ಅಚ್ಚಾದ ಪುಸ್ತಕ** ತೆರೆದ-ಅಂಚೆ



ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

ಶ್ರೀಮತಿ/ಶ್ರೀ..........................................

..........................................

..........................................

ಮುದ್ರಕರು : 'ಚಂದನ ಪ್ರಿಂಟರ್ಸ್', ನಂ. ೩೧೨, ೭ನೇ ಮೇನ್, ನಾಗೇಂದ್ರ ಬ್ಲಾಕ್, ಬನಶಂಕರಿ ೧ನೇ ಹಂತ, ಬೆಂಗಳೂರು-೫೦. (೭೫೦ ಪ್ರತಿಗಳು)
ಮೊಬೈಲ್ ನಂ. : ೯೯೪೫೭೨೩೭೫೪